**ಕರ್ನಾಟಕ ವಿಧಾನಪರಿಷತ್ತು**

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 934 (1110) |
| ಸದಸ್ಯರ ಹೆಸರು | ಶ್ರೀ ಎಂ ನಾರಾಯಣಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ವಿಷಯ | ಕೋವಿಡ್‌ನಿಂದ ಮೃತಪಟ್ಟ ಬಿ.ಪಿ.ಎಲ್ ಕುಟುಂಬದವರಿಗೆ ಪರಿಹಾರಧನದ ಬಗ್ಗೆ. |
| ಉತ್ತರಿಸಬೇಕಾದ ದಿನಾಂಕ | 22-12-2021 |
| ಉತ್ತರಿಸುವ ಸಚಿವರು | ಕಂದಾಯ ಸಚಿವರು |
| **ಪ್ರಶ್ನೆ** | **ಉತ್ತರ** |
| ಅ) 2020 ಮತ್ತು 2021 ರಲ್ಲಿ ಕೋವಿಡ್‌ನಿಂದ ಸಾವಿಗೀಡಾದ ಬಿ.ಪಿ.ಎಲ್ ಕುಟುಂಬಕ್ಕೆ ಸೇರಿದ ಮೃತ ಸಂಖ್ಯೆ ಎಷ್ಟು; | ಆರೋಗ್ಯ ಇಲಾಖೆಯ ಮಾಹಿತಿಯನ್ವಯ ನವೆಂಬರ್-2021 ರ ಅಂತ್ಯಕ್ಕೆ ರಾಜ್ಯದಲ್ಲಿ ಒಟ್ಟು 38195 ಕೋವಿಡ್‌ನಿಂದ ಮೃತರಾಗಿದ್ದು, ಈ ಪೈಕಿ ಶೇ 50 ರಷ್ಟು ಬಿ.ಪಿ.ಎಲ್ ಕುಟುಂಬಕ್ಕೆ ಸೇರಿದ ಮೃತರು ಎಂಬುದಾಗಿ ಅಂದಾಜಿಸಲಾಗಿದೆ. |
| ಆ) ಕೋವಿಡ್‌ನಿಂದ ಮೃತರಾದ ಕುಟುಂಬಕ್ಕೆ ಸರ್ಕಾರ ನಿಗದಿಪಡಿಸಿದ ಪರಿಹಾರಧನ ಎಷ್ಟು ಮತ್ತು ಕೇಂದ್ರ ಸರ್ಕಾರದಿಂದ ಸಿಗುವ ಪರಿಹಾರ ಧನವೆಷ್ಟು; (ಸಂಪೂರ್ಣ ಮಾಹಿತಿ ನೀಡುವುದು) | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕೋವಿಡ್‌ನಿಂದ ಮೃತಪಟ್ಟ ಎಲ್ಲಾ ಪ್ರಕರಣಗಳಲ್ಲಿ ರೂ 50,000/- ಗಳ ಪರಿಹಾರ ಧನವನ್ನು ರಾಜ್ಯ ವಿಪತ್ತು ಪರಿಹಾರ ನಿಧಿ (SDRF) ಯಿಂದ ನೇರ ಹಣ ಸಂದಾಯದ ಮೂಲಕ ಫಲಾನುಭವಿಗಳಿಗೆ ಪಾವತಿಸಲಾಗುತ್ತಿದೆ ಹಾಗೂ ಕೋವಿಡ್‌ನಿಂದ ಮೃತರಾದ ಬಿ.ಪಿ.ಎಲ್ ಕುಟುಂಬಕ್ಕೆ ರಾಜ್ಯ ಸರ್ಕಾರದಿಂದ ರೂ 1.00 ಲಕ್ಷ ಪರಿಹಾರವನ್ನು ಚೆಕ್ ಮೂಲಕ ವಿತರಿಸಲಾಗುತ್ತಿದೆ. |
| ಇ) ಮೃತ ಕುಟುಂಬಗಳಿಗೆ ಪರಿಹಾರ ನೀಡುವಾಗ ಅನುಸರಿಸುವ ಮಾನದಂಡಗಳೇನು; | ಕೋವಿಡ್-19 ಪರಿಹಾರ ನೀಡಲು ರಾಜ್ಯ ಸರ್ಕಾರದಿಂದ ಹೊರಡಿಸಲಾದ ಆದೇಶ ಹಾಗೂ ಮಾರ್ಗಸೂಚಿಗಳಲ್ಲಿ ನೀಡಿರುವ ನಮೂನೆಯಲ್ಲಿ ಅರ್ಜಿದಾರರು ಅಗತ್ಯ ಮಾಹಿತಿಯನ್ನು ಹಾಗೂ ಈ ಕೆಳಕಂಡ ಕಡ್ಡಾಯ ದಾಖಲೆಗಳನ್ನು ಸಲ್ಲಿಸಬೇಕಾಗುತ್ತದೆ.<br>• ಮೃತರ ಆಧಾರ್ ಸಂಖ್ಯೆ<br>• ಅರ್ಜಿದಾರರ ಆಧಾರ್ ಸಂಖ್ಯೆ ಹಾಗೂ ಆಧಾರ್ ಜೋಡಣೆಯಾದ ಬ್ಯಾಂಕ್ ಖಾತೆ ವಿವರ<br>ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಹಾಗೂ ಬಿಬಿಎಂಪಿ ವ್ಯಾಪ್ತಿಯಲ್ಲಿ ಜಂಟಿ ಆಯುಕ್ತರು ಅನುಮೋದಿಸಲಾದ ಫಲಾನುಭವಿಗಳಿಗೆ ರೂ 50,000/- ಪರಿಹಾರ ಧನವನ್ನು ಆಧಾರ್ ಆಧಾರಿತ ನೇರ ಹಣ ಸಂದಾಯದ ಮೂಲಕ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗುವುದು. ರಾಜ್ಯ ಸರ್ಕಾರದಿಂದ ನೀಡುವ ರೂ 1.00 ಲಕ್ಷ ಪರಿಹಾರವನ್ನು ಜಿಲ್ಲಾಮಟ್ಟದಲ್ಲಿ ಹಾಗೂ ಬಿಬಿಎಂಪಿ ವ್ಯಾಪ್ತಿಯಲ್ಲಿ ವಲಯವಾರು ಚೆಕ್ ಮೂಲಕ ಫಲಾನುಭವಿಗಳಿಗೆ ನೀಡಲಾಗುವುದು. |
| ಈ) ಪರಿಹಾರ ಮೊತ್ತ ನೀಡುವ ಬಗ್ಗೆ ಘೋಷಣೆಯಾದಾಗಿನಿಂದ ಇಲ್ಲಿಯವರೆಗೂ ಎಷ್ಟು ಕುಟುಂಬಗಳಿಗೆ ಪರಿಹಾರ ನೀಡಲಾಗಿದೆ; ಹಾಗೂ ಇದುವರೆಗೂ ಪರಿಹಾರ ನೀಡಿಲ್ಲದಿದ್ದಲ್ಲಿ, ಯಾವ ಕಾಲಮಿತಿಯೊಳಗೆ ಪರಿಹಾರದ ಮೊತ್ತವನ್ನು ನೀಡಲಾಗುವುದು? | ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಒಟ್ಟು 20,500 ಫಲಾನುಭವಿಗಳಿಗೆ ರೂ 50,000/- ಗಳ ಪರಿಹಾರವನ್ನು ನೇರ ನಗದು ವರ್ಗಾವಣೆ ಮೂಲಕ ವಿತರಿಸಲು ಕ್ರಮ ವಹಿಸಲಾಗಿದೆ. ಈ ಪೈಕಿ 3554 ಪ್ರಕರಣಗಳಲ್ಲಿ ಬ್ಯಾಂಕ್ ಖಾತೆಯೊಂದಿಗೆ ಆಧಾರ್ ಸಂಖ್ಯೆ ಜೋಡಣೆಯಾಗದಿರುವುದರಿಂದ ಪರಿಹಾರ ವಿತರಣೆಯಾಗಿರುವುದಿಲ್ಲ. ಹಾಗೂ ಜಿಲ್ಲಾಧಿಕಾರಿಗಳಿಂದ 11,278 ಬಿ.ಪಿ.ಎಲ್ ಪ್ರಕರಣಗಳು ಅನುಮೋದಿತಗೊಂಡಿದ್ದು, ಈ ಫಲಾನುಭವಿಗಳಿಗೆ ಚೆಕ್ ವಿತರಣೆ ಕಾರ್ಯ ಪ್ರಗತಿಯಲ್ಲಿರುತ್ತದೆ. |

**ಸಂಖ್ಯೆ: DSSP/LCQ/40 /2021**

(ಆರ್. ಅಶೋಕ)
**ಕಂದಾಯ ಸಚಿವರು**